## ENERGY SECRETARIAT

**Sub :** Transfer of 2.1 MW (SND-103) wind power capacity in favour of M/s KRBL Limited-reg.

**Read :** 1. Govt. Order No. EN 191 NCE 2005 dated: 19-08-2005.
2. Govt. Order No. EN 100 NCE 2005 dated: 30-08-2005.
3.Govt. Order No. EN 177 NCE 2008 dated: 24-12-2008.
4.Govt. Order No. EN 123 NCE 2011 dated: 05—03-2011.
5.Letter No. KRED/08/KRBL-2.1MW (SND 103) Malaxmi WP/2011/2609 dated : 02-09-20111 received from the Managing Director, Karnataka Renewable Energy Development Limited, Bangalore.

**Preamble:**

In the Government Order read at (1) above, sanction has been accorded for allottment of 82.6 MW capacity wind power project at Raichur & Bellary Districts to M/s Suzlon Developers Limited.

IN the Government Order read at (2) above, sanction has been accorded for change of the Company's name from M/s Suzlon Developers Private Limited to Ms Suzlon Infrastructure Limited.

In the Government Order read at (3) above, sanction has been accorded for enhancement of wind power capacity from 15.60 MW (part capacity of 82.6 MW) to 40.25 MW in favour of M/s Suzlon Infrastructure Limited at Kurgod, Sindigere site Bellary District.

In the Government Order read at (4) above, sanction has been accorded for transfer of 2.1 MW capacity wind power project in favour of M/s Malaxmi Wind Power from out of the sanctioned 40.25 MW capacity to M/s Suzlon Infrastructure Limited at Sindigere site, near Sindigere village, Bellary Taluk, Bellary District.

The Managing Director, Karnataka Renewable Energy Development Limited, Bangalore in his letter read at (5) above, has recommended to the Government for transfer of 2.1 MW (SND-103) wind power capacity in favour of M/s KRBL Limited from 2.1 MW capacity transferred to M/s Malaxmi Wind power at Sindigere village, Bellary Taluk, Bellary District.

The proposal has ben examined in detail, hence the following Order:-

**Government Order No. EN 355 NCE 2011, Bangalore, dated 24-09-2011**

Government accords approval for transfer of 2.1 MW wind power capacity in favour of M/s KRBL Limited from 2.1 MW capacity transferred to M/s Malaxmi Wind Power at Sindigere Village, Bellary Taluk , Bellary District as detailed below and subject to the following conditions.

| Village Name | Taluk & District | MW | Land Survey Number | No of WTGs | Extent in Land (Ha) | WTG Number |
|---|---|---|---|---|---|---|
| Sindigere | Bellary/Bellary | 2.1 | 77 | 1 No. | 2 Acre Per WTg | SND 103 |

1. M/s KRBL Limited shall execute an agreement with Government within 45 (forty five) days from the date of issue of this order.
2. PPA is assigned to GESCOM. GESCOM shall execute the PPA with M/s KRBL Limited.
3. The Company should commission the project by 31.10.2011 and give undertaking to that effect.
4. The Government reserves the right to Cancel/modify this Order.

The other terms and conditions of the Government Order read at (1) above shall IPSO FACTO be applicable.

By Order and in the name of the Governor of Karnataka
**Suresh B. Krishnappanavar**
Under Secretary to Government
Energy Department

P.R. 2425

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ 2011–12ನೇ ಸಾಲಿನಲ್ಲಿ ಎರಡನೇ ಕಂತಾಗಿ ರೂ. 850.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಯೋಇ 15 ಮಪ್ರಮಂ 2011 ದಿನಾಂಕ : 26ನೇ ಸೆಪ್ಟೆಂಬರ್ 2011.
**2.** ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಇವರ ಪತ್ರ ಸಂಖ್ಯೆ: ಮಪ್ರಮಂ: ನಗದು ಅನುದಾನ : 2011–12/912, ದಿನಾಂಕ 13–09–2011.

**ಪ್ರಸ್ತಾವನೆ :**

2011–12ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಲೆಕ್ಕಶೀರ್ಷಿಕೆ "2515–00–800–0–05– (ಯೋಜನೆ)" ಅಡಿಯಲ್ಲಿ ರೂ. 100.00 ಲಕ್ಷಗಳನ್ನು ಹಾಗೂ "4515–00–800–0–03" ಅಡಿಯಲ್ಲಿ ರೂ. 3300.00 ಲಕ್ಷಗಳನ್ನು ಒದಗಿಸಲಾಗಿದೆ. ಮೇಲೆ ಓದಲಾದ (1)ರ ಆದೇಶದಲ್ಲಿ ಮೊದಲನೆಯ ಕಂತಗಿ ರೂ. 850.00 ಲಕ್ಷಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ (2) ಪತ್ರದಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಕೋರಿರುವ ಹಿನ್ನೆಲೆಯಲ್ಲಿ ಮಂಡಳಿಗೆ ಎರಡನೆಯ ಕಂತಾಗಿ ರೂ. 850.00 ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 15 ಮಪ್ರಮಂ 2011 ಬೆಂಗಳೂರು, ದಿನಾಂಕ : 03–10–2011.**

2011–12ನೇ ಸಾಲಿನಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಆಡಳಿತ ವೆಚ್ಚಗಳಿಗಾಗಿ ಲೆಕ್ಕಶೀರ್ಷಿಕೆ "2515–00–800–0–05–101 (ಸಹಾಯಾನುದಾನ) ಅಡಿಯಲ್ಲಿ ರೂ. 40.00 ಲಕ್ಷಗಳನ್ನು (ನಲವತ್ತು ಲಕ್ಷಗಳು ಮಾತ್ರ) ಬಂಡವಾಳ ವೆಚ್ಚಗಳಿಗಾಗಿ ಲೆಕ್ಕಶೀರ್ಷಿಕೆ "4515–00–800–0–03–132" ಅಡಿಯಲ್ಲಿ ರೂ. 650.00 ಲಕ್ಷಗಳನ್ನು (ಅರನ್ನೂರು ಐವತ್ತು ಲಕ್ಷ ರೂಪಾಯಿಗಳು ಮಾತ್ರ) ವಿಶೇಷ ಘಟಕ ಯೋಜನೆಯಡಿ "4515–00–800–0–03–422" ಅಡಿಯಲ್ಲಿ ರೂ. 100.00 ಲಕ್ಷಗಳನ್ನು (ನೂರು ಲಕ್ಷಗಳು ಮಾತ್ರ) ಹಾಗೂ ಗಿರಿಜನ ಉಪಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಲೆಕ್ಕಶೀರ್ಷಿಕೆ ""4515–00–800–0–03–423" ಅಡಿಯಲ್ಲಿ ರೂ. 60.00 ಲಕ್ಷಗಳನ್ನು (ಅರವತ್ತು ಲಕ್ಷಗಳು ಮಾತ್ರ) ಒಟ್ಟು ರೂ. 85.00 ಲಕ್ಷಗಳನ್ನು (ಎಂಭತ್ತೈದು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲಾಗಿದೆ.

2) ಬಿಡುಗಡೆಯಾದ ಮೊತ್ತವನ್ನು ಮಂಡಳಿಯ ವೈಯುಕ್ತಿಕ ಖಾತೆಯಲ್ಲಿ ಮೊದಲು ಇಟ್ಟು ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು. ನಿಯಮಾನುಸಾರ ಹಣ ಬಳಿಕೆ ದೃಢೀಕರಣ ಪತ್ರವನ್ನು 2011–12ರ ಸಾಲಿನಲ್ಲಿ ಮಂಡಳಿಯ ಕಾರ್ಯದರ್ಶಿಯವರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್ 1 ಟಿಎಫ್‌ಪಿ 2008 ದಿನಾಂಕ 16–05–2008ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ನೀಡಲಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, 1 & 2

ಪಿ.ಆರ್. 2426 ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಯೋಇ 29 ಮಪ್ರಮಂ 2010 ದಿನಾಂಕ: 15–11–2010.

**2.** ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ, ಇವರ ಪತ್ರ ಸಂಖ್ಯೆ: ಮಪ್ರಮಂ/ಸಿಬ್ಬಂದಿ/ಹು.ಮಂ./2011–2012/545 ದಿನಾಂಕ 14–07–2011.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ದಿನಾಂಕ 15–11–2010ರ ಸರ್ಕಾರದ ಆದೇಶದಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಸೂಚಿಸಲಾದ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 24–08–2010 ರಿಂದ 23–08–2011 ರವರೆಗೆ ಮುಂದುವರೆಸಲಾಗಿತ್ತು ಪ್ರಸ್ತುತ ಸದರಿ ಹುದ್ದೆಗಳನ್ನು ದಿನಾಂಕ: 24–08–2011 ರಿಂದ ಮುಂದಿನ ಎರಡು ವರ್ಷದ ಅವಧಿಗೆ ಮೇಲೆ ಓದಲಾದ (2)ರ ಪತ್ರದಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇವರು ಇದುವರೆವಿಗೂ ಮುಂದುವರಿಸಲಾದ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 24–08–2011 ರಿಂದ 23–08–2012 ರವರೆಗೆ ಮುಂದುವರೆಸಲು ಸಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 22 ಮಪ್ರಮಂ 2011 ಬೆಂಗಳೂರು, ದಿನಾಂಕ : 29–09–2011.**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇಲ್ಲಿಗೆ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 24–08–2011 ರಿಂದ 23–08–2012 ರವರೆಗೆ ಅಂದರೆ (ಒಂದು ವರ್ಷದವರೆಗೆ) ಮುಂದುವರೆಸಲು ಸಕಾರದ ಮಂಜೂರಾತಿ ನೀಡಿದೆ.

| ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|
| ಅ. ಆಡಳಿತ ವಿಭಾಗ | |
| 1. ಪ್ರಥಮ ದರ್ಜೆ ಸಹಾಯಕರು | 02 |
| 2. ಬೆರಳಚ್ಚುಗಾರರು | 01 |
| ಆ. ಲೆಕ್ಕ ಪತ್ರ ವಿಭಾಗ:– | |
| ಸಹಾಯಕ ನಿಯಂತ್ರಕರು | 01 |
| ಇ. ಯೋಜನಾ ವಿಭಾಗ | |
| 1. ಉಪ ನಿರ್ದೇಶಕರು (ಯೋಜನೆ) | 01 |
| 2. ಕಂಪ್ಯೂಟರ್ ಆಪರೇಟರ್ | 01 |
| ಈ. ತಾಂತ್ರಿಕ ವಿಭಾಗ | |
| 1. ಶೀಘ್ರಲಿಪಿಗಾರರು | 01 |
| 2. ಡಿ ದರ್ಜೆ ನೌಕರರು | 01 |

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ 1&2

ಪಿ.ಆರ್. 2427 ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಚಿಕ್ಕನರಸಿಂಹಯ್ಯ, ನಿವೃತ್ತ ಮುಖ್ಯ ಲೆಕ್ಕಿಗರು, ಖಜಾನೆ ಇಲಾಖೆ ಅವರ ವಿರುದ್ಧ ಶಿಸ್ತುಕ್ರಮ ಜರುಗಿಸಲು ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ :ಆಇ 173 ಆಖಇ, 2010 ಬೆಂಗಳೂರು, ದಿ: 28–09–2011**

ಶ್ರೀ ಚಿಕ್ಕನರಸಿಂಹಯ್ಯ, ನಿವೃತ್ತ ಮುಖ್ಯ ಲೆಕ್ಕಿಗರು, ಖಜಾನೆ ಇಲಾಖೆ ಅವರು ಬೆಂಗಳೂರು ಗ್ರಾಮಾಂತರ ಜಿಲ್ಲಾ ಖಜಾನೆ, ಬೆಂಗಳೂರು ಇಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ದಿ: 20–04–2008 ರಂದು ನಿಧನರಾದ ಸಹಕಾರ ಇಲಾಖೆಯ ನಿವೃತ್ತ ಗ್ರೂಪ್–ಡಿ ನೌಕರ ಶ್ರೀ ಮಲ್ಲಯ್ಯ ಎಂಬುವವರ ಕುಟುಂಬಕ್ಕೆ ಮಹಾಲೇಖಪಾಲರ ಕಚೇರಿಯಿಂದ ಅಗತ್ಯ ಪ್ರಾಧಿಕಾರಣ ಆದೇಶ ಬರುವುದಕ್ಕೆ ಮುಂಚೆಯೇ ಪಿ.ಪಿ.ಓ. ಸಂಖ್ಯೆ: 44390/RPR ಆಧಾರದ ಮೇಲೆ ಶ್ರೀಮತಿ ನರಸಮ್ಮ ಕೋಂ ಮಲ್ಲಯ್ಯ ಎಂಬುವವರಿಗೆ ಕುಟುಂಬ ವಿಶ್ರಾಂತಿ ವೇತನವನ್ನು ಪಾವತಿ ಮಾಡಲು ಕಡತವನ್ನು ಸಿದ್ಧಪಡಿಸಿ ಸಲ್ಲಿಸುವ ಮೂಲಕ ದಿ: 21–04–2008 ರಿಂದ 31–03–2010 ರವರೆಗೆ ಅಕ್ರಮವಾಗಿ ಕುಟುಂಬ ವಿಶ್ರಾಂತಿ ವೇತನ ಪಾವತಿಯಾಗಲು ಕಾರಣರಾಗಿ ಸರ್ಕಾರಕ್ಕೆ ರೂ. 69,424/– ಗಳ ನಷ್ಟವನ್ನು ಉಂಟು ಮಾಡಿರುವುದು ಕಂಡು ಬಂದಿರುವುದರಿಂದಲೂ,

ಈ ದುರ್ನಡತೆಗಾಗಿ ಶ್ರೀ ಚಿಕ್ಕನರಸಿಂಹಯ್ಯ ನಿವೃತ್ತ ಮುಖ್ಯ ಲೆಕ್ಕಿಗರು, ಖಜಾನೆ ಇಲಾಖೆ ಅವರ ವಿರುದ್ಧ ಶಿಸ್ತುಕ್ರಮ ಜರುಗಿಸುವುದು ಅವಶ್ಯವೆಂದು ಕಂಡುಬಂದಿರುವುದರಿಂದಲೂ

ಆದ್ದರಿಂ ಕರ್ನಾಟಕ ನಾಗರೀಕ ಸೇವ ನಿಯಮಾವಳಿಯ 214(2)(ಬಿ)(ii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಚಿಕ್ಕನರಸಿಂಹಯ್ಯ ನಿವೃತ್ತ ಮುಖ್ಯ ಲೆಕ್ಕಿಗರು, ಖಜಾನೆ ಇಲಾಖೆ ಅವರ ವಿರುದ್ಧ ಶಿಸ್ತಿನ ಕ್ರಮವನ್ನು ಜರುಗಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ನಿರ್ದೇಶಕರು, ಖಜಾನೆ ಇಲಾಖೆ ಅವರು ಈ ವಿಚಾರಣೆಯನ್ನು ನಡೆಸತಕ್ಕದ್ದು ಹಾಗೂ ವಿಚಾರಣೆಯು ಬೆಂಗಳೂರಿನಲ್ಲಿ ನಡೆಯತಕ್ಕದ್ದು.

ಸೇವೆಯಲ್ಲಿರುವ ಸರ್ಕಾರಿ ನೌಕರನನ್ನು ವಜಾ ಮಾಡಲು ಅನುಸರಿಸಲಾಗುವ ಕಾರ್ಯವಿಧಾನವನ್ನು ಅನುಸರಿಸಿ ವಿಚಾರಣೆಯನ್ನು ನಡೆಸತಕ್ಕದ್ದು ಹಾಗೂ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 2428 ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಡಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ರಾಮನಗರ, ಇವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ(ಜಿ)/ಬಿಡಿ–04/ಸಿಆರ್–02/2011, ರಾಮನಗರ, ದಿನಾಂಕ 21–07–2011.
2. ತನಿಖಾಧಿಕಾರಿಯವರ ಅಂತಿಮ ವರದಿ ದಿನಾಂಕ 29–06–2011.
3. ತನಿಕಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ :**

ಶ್ರೀ ಡಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ರಾಮನಗರ, ಇವರ ವಿರುದ್ಧ ಗುನ್ನೆ ಸಂಖ್ಯೆ : 02/2011 ರಲ್ಲಿ, ಪೋಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ರಾಮನಗರ, ಪೋಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ಮೇಲೆ ಓದಲಾಗಿರುವ ಕ್ರಮ ಸಂಖ್ಯೆ : (1)ರ ಪತ್ರ ದಿನಾಂಕ 21–07–2011 ರೊಡನೆ ಕಳುಹಿಸುತ್ತಾ, ಆಪಾದಿತ ಅಧಿಕಾರಿಯವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಮಂಜೂರಾತಿಗಾಗಿ ಸಕ್ಷಮ ಪ್ರಾಧಿಕಾರವಾದ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಹೆಚ್ಚುವರಿ ಪೋಲೀಸ್ ಮಹಾನಿರ್ದೇಶಕರು, (ಪೋಲೀಸ್ ವಿಭಾಗ), ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ದಿನಾಂಕ : 21–07–2011ರ ಪತ್ರದೊಡನೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

1) ಶ್ರೀ ಪಿ. ಶಿವಣ್ಣ ಬಿನ್ ಪುಟ್ಟಮಾದೇಗೌಡ, ವಯಸ್ಸು 32 ವರ್ಷ, ಗರಳಪುರ, ಸಂತೆಕೋಡಿಹಳ್ಳಿ ಅಂಚೆ, ಕೋಡಿಹಳ್ಳಿ ಹೋಬಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ, ಇವರ ದೂರು ದಿನಾಂಕ 28–01–2011.
2) ಪ್ರಥಮ ವರ್ತಮಾನ ವರದಿ : ರಾಮನಗರ ಲೋಕಾಯುಕ್ತ ಪೋಲೀಸ್ ಠಾಣೆ ಪ್ರಕರಣದ ಸಂಖ್ಯೆ : 02/2011.
3) ಪ್ರಾಯೋಗಿಕ ಪಂಚನಾಮೆ ದಿನಾಂಕ 31-01–2011.
4) ಟ್ರ್ಯಾಪ್‌ನ ಮಹಜರ್ ದಿನಾಂಕ 31-01–2011.
5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ : ಕ.ಲೋ/ರಾವಿ/ಸಿ.ಆರ್.ಎಂ.–02/2011, ರಾಮನಗರ.
6) ಕೃತ್ಯ ನಡೆದ ಸ್ಥಳದ ನಕಾಶೆ :

**1) ಸಾಕ್ಷಿ ಹೇಳಿಕೆಗಳ ಪಟ್ಟಿ :**

1. ಶ್ರೀ ಪಿ. ಶಿವಣ್ಣ, ಫಿರ್ಯಾದುದಾರರು.
2. ಶ್ರೀ ಪದ್ಮನಾಭ, ಪ್ರ.ದ.ಸ., ಸಹಕಾರ ಇಲಾಖೆ, ರಾಮನಗರ.

3. ಶ್ರೀ ಬಿ. ಹರೀಶ್, ಪ್ರ.ದ.ಸ., ಸಹಕಾರ ಇಲಾಖೆ, ರಾಮನಗರ.
4. ಶ್ರೀ ಅನಂತರಾಜು, ಇನ್‌ಸ್ಪೆಕ್ಟರ್, ವಾಣಿಜ್ಯ ತೆರಿಗೆ ಅಧಿಕಾರಿ ಕಛೇರಿ, ರಾಮನಗರ.
5. ಶ್ರೀ ನಾಗೇಂದ್ರ, ಬೆರಳಚ್ಚುಗಾರ, ವಾಣಿಜ್ಯ ತೆರಿಗೆ ಅಧಿಕಾರಿ ಕಛೇರಿ, ರಾಮನಗರ.
6. ಶ್ರೀ ಜಗದೀಶ್ ಪ್ರಸಾದ್, ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು.
7. ಶ್ರೀ ಮಲ್ಲಪ್ಪ, ವಾಣಿಜ್ಯ ತೆರಿಗೆ ಅಧಿಕಾರಿ, ಮೌಲ್ಯವರ್ಧಿತ ತೆರಿಗೆ ವಿಭಾಗ-2, ಮಲ್ಲೇಶ್ವರಂ, ಬೆಂಗಳೂರು.
8. ಶ್ರೀ ಶ್ರೀನಿವಾಸ ರೆಡ್ಡಿ, ವಾಣಿಜ್ಯ ತೆರಿಗೆ ಅಧಿಕಾರಿ.
9. ಶ್ರೀ ಬಸವರಾಜಗೋವಿನದಾದ್, ಸಹಾಯಕ ರಾಸಾಯನಿಕ ತಜ್ಞರು.
10. ಶ್ರೀ ಕಾಶಿರಾಂ ಪವಾರ್, ಸಹಾಯಕ ನಿರ್ವಾಹಕ ಅಭಿಯಂತರರು, ಬೆಸ್ಕಾಂ ಇಲಾಖೆ, ರಾಮನಗರ ಉಪ ವಿಭಾಗ, ರಾಮನಗರ.
11. ಶ್ರೀ ವಿ. ಗೋವಿಂದರಾಜು, ಸಹಾಯಕ ಇಂಜಿನಿಯರ್, ನಂ.1, ಉಪ ವಿಭಾಗ, ಲೋಕೋಪಯೋಗಿ ಉಪ ವಿಭಾಗ, ರಾಮನಗರ.
12. ಶ್ರೀ ಎ.ವಿ. ಪ್ರಭುರಾಜೇ ಅರಸ್, ಪೊಲೀಸ್ ಮುಖ್ಯ ಪೇದೆ, ಕರ್ನಾಟಕ ಲೋಕಾಯುಕ್ತ ರಾಮನಗರ ಜಿಲ್ಲೆ, ಪೊಲೀಸ್ ಠಾಣೆ, ರಾಮನಗರ.
13. ಶ್ರೀ ಎಸ್.ಬಿ. ಬೋರೇಗೌಡ, ಪೊಲೀಸ್ ಪೇದೆ, ಕರ್ನಾಟಕ ಲೋಕಾಯುಕ್ತ ಕಛೇರಿ, ಕರ್ನಾಟಕ ಲೋಕಾಯುಕ್ತ, ರಾಮನಗರ ವಿಭಾಗ, ರಾಮನಗರ.
14. ಶ್ರೀ ಹೆಚ್.ಕೆ. ಸುರೇಶ್, ಪೊಲೀಸ್ ಪೇದೆ, ಪೊಲೀಸ್ ಅಧೀಕ್ಷಕರವರ ಕಛೇರಿ, ಕರ್ನಾಟಕ ಲೋಕಾಯುಕ್ತ, ರಾಮನಗರ ವಿಭಾಗ, ರಾಮನಗರ.
15. ಶ್ರೀ ಕೆ. ಬೀರಯ್ಯ, ಪೊಲೀಸ್ ಪೇದೆ, ಕರ್ನಾಟಕ ಲೋಕಾಯುಕ್ತ, ರಾಮನಗರ ವಿಭಾಗ, ರಾಮನಗರ.
16. ಶ್ರೀ ಡಿ. ಕೃಷ್ಣಮೂರ್ತಿ, ಪೊಲೀಸ್ ಪೇದೆ, ಕರ್ನಾಟಕ ಲೋಕಾಯುಕ್ತ, ರಾಮನಗರ ವಿಭಾಗ, ರಾಮನಗರ.
17. ಶ್ರೀ ಸಣ್ಣತಮ್ಮಪ್ಪಯ್ಯ ಒಡೆಯರ್, ಪೊಲೀಸ್ ಇನ್‌ಸ್ಪೆಕ್ಟರ್, ರಾಮನಗರ ಜಿಲ್ಲೆ, ರಾಮನಗರ.

ಫಿರ್ಯಾದುದಾರರಾದ ಶ್ರೀ ಪಿ. ಶಿವಣ್ಣ ಬಿನ್ ಪುಟ್ಟಮಾದೇಗೌಡರವರು, ಗರಳಪುರ, ಸಂತೆಕೋಡಿ ಹಳ್ಳಿಯಲ್ಲಿ ಮಹದೇಶ್ವರ ಸ್ಟೀಲ್ ಅಂಡ್ ಹಾರ್ಡ್‌ವೇರ್ ಎಂಬ ಅಂಗಡಿಯನ್ನು ಇಟ್ಟುಕೊಂಡು ನಡೆಸುತ್ತಿದ್ದು, ಅಂಗಡಿಯ ವ್ಯಾಪಾರ ವಹಿವಾಟು ನಡೆಸಲು ಟಿನ್ ನಂಬರ್ ಅವಶ್ಯಕತೆ ಇದ್ದುದರಿಂದ ಫಿರ್ಯಾದುದಾರರು ಹೊಸ ನೋಂದಣಿ ಪತ್ರವನ್ನು ಪಡೆಯಲು ಅರ್ಜಿಯನ್ನು ಸಲ್ಲಿಸಿದ್ದು, ನಂತರ ದಿನಾಂಕ 06-01-2011 ರಂದು ವಾಣಿಜ್ಯ ತೆರಿಗೆ ಇಲಾಖೆಗೆ ಹೋಗಿ, ವಾಣಿಜ್ಯ ತೆರಿಗೆ ಅಧಿಕಾರಿ ಶ್ರೀ ರಾಜಣ್ಣ, ಇವರನ್ನು ಭೇಟಿ ಮಾಡಿದಾಗ, ಹೊಸ ಕರಾರು ಪತ್ರವನ್ನು ಮಾಡಿಸಿಕೊಂಡು ಬನ್ನಿ ಎಂದು ತಿಳಿಸಿದ್ದು, ಅದರಂತೆ ಹೊಸ ಕರಾರು ಪತ್ರವನ್ನು ನೀಡಿ ದಿನಾಂಕ 12-01-2011 ರಂದು ಒಟ್ಟು ರೂ.4,525/- ಹಣವನ್ನು ಶುಲ್ಕವಾಗಿ ಪಾವತಿಸಿ ರಸೀದಿ ಪಡೆದಿರುವುದಾಗಿ ತಿಳಿಸಿರುತ್ತಾರೆ. ಫಿರ್ಯಾದುದಾರರು ದಿನಾಂಕ 20-01-2011 ರಂದು ಶ್ರೀ ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿಯವರನ್ನು ಭೇಟಿಯಾಗಿ, ವಿಚಾರ ಮಾಡಿದಾಗ ನಿನ್ನ ನೋಂದಣಿ ಪತ್ರ ರೆಡಿಯಾಗಿದೆ. ರೂ.3,000/- ಕೊಟ್ಟು ನೋಂದಣಿ ಪತ್ರ ತೆಗೆದುಕೊಂಡು ಹೋಗುವಂತೆ ತಿಳಿಸಿದ್ದು ಮತ್ತೆ ಫಿರ್ಯಾದುದಾರರು ಶ್ರೀ ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿಯವರನ್ನು ಭೇಟಿ ಮಾಡಿ, ಅರ್ಜಿಯ ಬಗ್ಗೆ ವಿಚಾರ ಮಾಡಿದಾಗ, ಪಾಸ್‌ವರ್ಡ್ ಹಾಕುವ ಕೆಲಸವನ್ನು ಮಾಡಿಕೊಡುತ್ತೇನೆ ರೂ.3,000/- ತಂದುಕೊಡಿ ಎಂದು ನೋಂದಣಿ ಪತ್ರಕೊಟ್ಟು ಕಳುಹಿಸಿರುತ್ತಾರೆ. ಈ ಸಂಬಂಧ ಫಿರ್ಯಾದುದಾರರಿಗೆ ಲಂಚದ ಹಣವನ್ನು ಕೊಡಲು ಇಷ್ಟವಿಲ್ಲವಾದ್ದರಿಂದ ಸೂಕ್ತ ಕಾನೂನು ರೀತ್ಯ ಕ್ರಮಕ್ಕೆ ಕೋರಿರುತ್ತಾರೆ.

ಸದರಿ ದೂರನ್ನು ಆಧರಿಸಿ, ರಾಮನಗರ ಲೋಕಾಯುಕ್ತ ಪೊಲೀಸ್‌ರವರು ಆರೋಪಿ ಸರ್ಕಾರಿ ನೌಕರರ ವಿರುದ್ಧ ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಗೆ 13(2)ರ ಪ್ರಕಾರ ರಾಮನಗರ ಲೋಕಾಯುಕ್ತ ಠಾಣೆ ಮೊಕದ್ದಮೆ ಸಂಖ್ಯೆ : 02/2011 ರಲ್ಲಿ ಪ್ರಕರಣವನ್ನು ದಾಖಲು ಮಾಡಿಕೊಂಡು ತನಿಖೆಯನ್ನು ಕೈಗೊಂಡಿರುತ್ತಾರೆ.

ನಂತರ ಪಂಚ ಸಾಕ್ಷಿಗಳೊಂದಿಗೆ ತನಿಖಾಧಿಕಾರಿ ಮತ್ತು ಅವರ ಸಿಬ್ಬಂದಿಯವರು ದಿನಾಂಕ 31-01-2011 ರಂದು ಬೀಸಿದ ಬಲೆಯು ಯಶಸ್ವಿಯಾಗಿದ್ದು, ಸದರಿ ಆರೋಪಿತ ಸರ್ಕಾರಿ ಅಧಿಕಾರಿಯಾದ ಶ್ರೀ ಡಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ರಾಮನಗರ, ಇವರು ನೆರಳು ಸಾಕ್ಷಿದಾರರ ಸಮಕ್ಷಮ ಫಿರ್ಯಾದುದಾರರಿಂದ ಲಂಚದ ಹಣ ರೂ.3,000-00ನ್ನು ಆರೋಪಿತರು ಶ್ರೀ ಪ್ರಭುಸ್ವಾಮಿ, ಅಟೆಂಡರ್ ಇವರ ಮೂಲಕ ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ, ಲೋಕಾಯುಕ್ತ ಪೊಲೀಸರು ವಶಪಡಿಸಿಕೊಂಡಿರುತ್ತಾರೆ. ನಡೆದ ಘಟನೆಯ ಬಗ್ಗೆ ಫಿರ್ಯಾದಿ ಮತ್ತು ನೆರಳು ಸಾಕ್ಷಿದಾರರು ತಮ್ಮ ಹೇಳಿಕೆಗಳಲ್ಲಿ ದೃಢಪಡಿಸಿರುತ್ತಾರೆ. ಸದರಿ ಆರೋಪಿತರನ್ನು ದಸ್ತಗಿರಿ ಮಾಡಿ, ಘನ ನ್ಯಾಯಾಲಯದ ನ್ಯಾಯಾಧೀಶರ ಮುಂದೆ ಹಾಜರುಪಡಿಸಿರುತ್ತಾರೆ.

ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಕೃತ್ಯನಡೆದ ಸ್ಥಳದ ನಕ್ಷೆ, ಆರೋಪಿತರ ಸೇವಾ ವಿವರಗಳು, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳನ್ನು ಪರಿಶೀಲಿಸಲಾಗಿದೆ. ಇದರಿಂದಾಗಿ ಶ್ರೀ ಡಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ಇವರ ಮೇಲಿನ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ 1988ರ ಕಲಂ 7,13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾದವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 7,13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕವೆಂದು ಸರ್ಕಾರಕ್ಕೆ ಮನವರಿಕೆಯಾಗಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಅಧಿಕಾರಿಯನ್ನು ಕೆಲಸದಿಂದ ತೆಗೆದುಹಾಕುವ ಅಧಿಕಾರವನ್ನು ಹೊಂದಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಆಪಾದಿತ ಅಧಿಕಾರಿಯಾದ ಶ್ರೀ ಡಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿಯನ್ನು ಲಂಚ

ನಿರೋಧ ಕಾಯ್ದೆ 1988ರ ಕಲಂ 7, 13(1)(ಡಿ)ರ ಜೊತೆಗೆ 13(2) ರಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 11 ವಾತೆತ 2011, ಬೆಂಗಳೂರು, ದಿನಾಂಕ 03ನೇ ಅಕ್ಟೋಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಆರ್. ಚಂದ್ರಶೇಖರಾರಾಧ್ಯ, ಪೀಠಾಧಿಕಾರಿ, ಆರ್ಥಿಕ ಇಲಾಖೆ, ವಾಣಿಜ್ಯ ತೆರಿಗೆ–2 ಶಾಖೆ ಆದ ನಾನು ಆಪಾದಿತ ಅಧಿಕಾರಿಯಾದ ಶ್ರೀ ಡಿ. ರಾಜಣ್ಣ, ವಾಣಿಜ್ಯ ತೆರಿಗೆ ಅಧಿಕಾರಿ, ರಾಮನಗರ, ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2) ರಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಅನುಮತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 18ರ ಪ್ರಕಾರ, ಈ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ಸಹಿಯ ಅಡಿಯಲ್ಲಿ ದಿನಾಂಕ : 03–10–2011 ರಂದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಆರ್. ಚಂದ್ರಶೇಖರಾರಾಧ್ಯ,**
ಪೀಠಾಧಿಕಾರಿ,
ಆರ್ಥಿಕ ಇಲಾಖೆ (ವಾಣಿಜ್ಯ ತೆರಿಗೆ–2).

ಪಿ.ಆರ್.ನಂ. 2429

## ಸಹಕಾರ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ ಇದ್ದಂತೆ ವಿವಿಧ ಯೋಜನೆಗಳಡಿ NCDC ಯಿಂದ ಪಡೆದಿರುವ ಸಾಲಗಳ ಮೇಲಿನ ಹೆಚ್ಚುವರಿ ಬಡ್ಡಿಯನ್ನು ಪಾವತಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ ಸಇ 127–ಸಂಮಾಸ – 2011, ದಿನಾಂಕ 07–09–2011.
2. ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ರವರ ಪತ್ರ ಸಂಖ್ಯೆ RCS-LNS-31-NCDC-2011-12, ದಿನಾಂಕ 15–09–2011.

**ಪ್ರಸ್ತಾವನೆ :**

ಮೇಲೆ ಓದಲಾದ (1) ರಲ್ಲಿನ ಆದೇಶದನ್ವಯ ಸಹಕಾರ ಇಲಾಖೆಯಿಂದ 2010–11ನೇ ಸಾಲಿನ ಅಂತ್ಯಕ್ಕೆ ಇದ್ದಂತೆ NCDC ವತಿಯಿಂದ ವಿವಿಧ ಯೋಜನೆಗಳಡಿ ಪಡೆಯಲಾದ ಸಾಲದ ಅಸಲು ಮತ್ತು ಬಡ್ಡಿ ಒಟ್ಟು ರೂ.3,76,03,155/– ಗಳನ್ನು NCDC ಗೆ ಪಾವತಿಸಲು ಆದೇಶಿಸಿದೆ.

ಮೇಲೆ ಓದಲಾದ 2 ರಲ್ಲಿನ ಪತ್ರದಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ರವರು 2010–11ನೇ ಸಾಲಿನ ಅಂತ್ಯಕ್ಕೆ ಇದ್ದಂತೆ NCDC ವತಿಯಿಂದ ವಿವಿಧ ಯೋಜನೆಗಳಿಗೆ ಪಡೆದಿರುವ ಸಾಲಗಳಿಗೆ ಸಂಬಂಧಿಸಿದಂತೆ ಶೇ. 0.25 ಮತ್ತು ಶೇ. 0.50ಗಳ ಬಡ್ಡಿ ದರವನ್ನು ದಿನಾಂಕ 11–07–2011 ಮತ್ತು ದಿನಾಂಕ 13–08–2011 ರಿಂದ SBI ರವರು ಹೆಚ್ಚು ಮಾಡಿರುವುದರಿಂದ, ರೂ.74,542.00ಗಳ ಹೆಚ್ಚುವರಿ ಬಡ್ಡಿಯನ್ನು ಪಾವತಿಸಬೇಕೆಂದು ಪ್ರಾಂತೀಯ ನಿರ್ದೇಶಕರು NCDC ಬೆಂಗಳೂರು ರವರ ಪತ್ರ ಸಂಖ್ಯೆ ಎನ್‌ಸಿಡಿಸಿ, 18–1–2011 RDS ದಿನಾಂಕ 16–08–2011 ಮತ್ತು ದಿನಾಂಕ 02–09–2011 ರಲ್ಲಿ ತಿಳಿಸಿರುವುದರಿಂದ, ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 127 ಸಂಮಾಸ 2011, ಬೆಂಗಳೂರು, ದಿನಾಂಕ 30ನೇ ಸೆಪ್ಟೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2010–11ನೇ ಸಾಲಿನ ಅಂತ್ಯಕ್ಕೆ NCDC ವತಿಯಿಂದ ವಿವಿಧ ಯೋಜನೆಗಳಿಗೆ ಪಡೆದಿರುವ ಸಾಲಗಳ ಮೇಲಿನ ಹೆಚ್ಚುವರಿ ಬಡ್ಡಿ ಮರು ಪಾವತಿ ಬಾಬ್ತು ಒಟ್ಟು ರೂ.74,542–00 (ಎಪ್ಪತ್ತನಾಲ್ಕು ಸಾವಿರದ ಐದುನೂರ ನಲವತ್ತೆರಡು ರೂಪಾಯಿಗಳು ಮಾತ್ರ) ಗಳನ್ನು, ಲೆಕ್ಕ ಶೀರ್ಷಿಕೆ 2049–01–200–2–03–240 (ಯೋಜನೇತರ) (ಪ್ರಭುತ) ರಡಿಯಲ್ಲಿ ಬಿಡುಗಡೆ ಮಾಡಿ NCDC ನವದೆಹಲಿ ಈ ಸಂಸ್ಥೆಗೆ ಪಾವತಿಸಲು ಆದೇಶಿಸಿದೆ. ಸದರಿ ಮೊಬಲಗನ್ನು ಪಾವತಿಸಲು ಅನುವಾಗಲು ಹಾಗೂ ಖಜಾನೆಯಿಂದ ಡ್ರಾ ಮಾಡಲು ಸಲ್ಲಿಸಬೇಕಾದ ಹಣ ಸಂದಾಯ ರಸೀದಿಯಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ) ರವರ ಸಹಿ ಮತ್ತು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು)ರವರ ಮೇಲು ಸಹಿ ಪಡೆದು ಡ್ರಾ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಸಇ 126 ಆಂಆಸ 2011 ದಿನಾಂಕ 23–09–2011 ರಲ್ಲಿ ನೀಡಲಾದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಜಿ. ಪಾಟೀಲ್,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ (ಪ್ರಭಾರ),
ಸಹಕಾರ ಇಲಾಖೆ.

ಪಿ.ಆರ್.ನಂ. 2430

## ತೋಟಗಾರಿಕಾ ಸಚಿವಾಲಯ

**ವಿಷಯ :** ಕಾಣೆಯಾಗಿರುವ ಶ್ರೀ ಕೆ. ಹೂವಯ್ಯ, ನಿವೃತ್ತ ರೇಷ್ಮೆ ಪ್ರದರ್ಶಕರು ಇವರ ಪತ್ನಿಗೆ ಕುಟುಂಬ ಪಿಂಚಣಿ ನೀಡುವ ಬಗ್ಗೆ.

**ಓದಲಾಗಿದೆ :** 1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ : ಸಿಬ್ಬಂದಿ 1 (8) ಕುಂ.ಪಿಂಚಣಿ/19/2007–08, ದಿನಾಂಕ 13–5–2008 ಮತ್ತು 27–7–2011.

2. ಅಧಿಕೃತ ಜ್ಞಾಪನ ಸಂಖ್ಯೆ : ಆಇ (ವಿಶೇಷ) 11 ಕುವಿವೇ 87, ದಿನಾಂಕ 21–3–1988.

**ಪ್ರಸ್ತಾವನೆ :**

ಶ್ರೀ ಕೆ. ಹೂವಯ್ಯ, ರೇಷ್ಮೆ ಪ್ರದರ್ಶಕರು ಇವರು ದಿನಾಂಕ 30–6–1999 ರಂದು ಸೇವೆಯಿಂದ ವಯೋನಿವೃತ್ತಿ ಹೊಂದಿದ್ದು, ದಿನಾಂಕ 1–7–1999 ರಿಂದ ನಿವೃತ್ತಿ ವೇತನವನ್ನು ಪಡೆಯುತ್ತಿದ್ದು, ಸದರಿ ನಿವೃತ್ತಿ ನೌಕರನು ಅವರ ಡಿಸೆಂಬರ್ 2004 ರ ಪಿಂಚಣಿಯನ್ನು ಡ್ರಾ ಮಾಡಲು ಕಾಮಗೆರೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕಾಮಗೆರೆ ಶಾಖೆ ಇಲ್ಲಿಗೆ ಹೋದವರು ಮನೆಗೆ ಹಿಂದಿರುಗಿ ಬಂದಿರುವುದಿಲ್ಲವೆಂದು, ಸದರಿ ನಿವೃತ್ತ ನೌಕರರ ಧರ್ಮಪತ್ನಿಯಾದ ಶ್ರೀಮತಿ ದೊಡ್ಡಮ್ಮ ಇವರು ಪೊಲೀಸ್ ಠಾಣೆಗೆ ದೂರು ನೀಡಿದ್ದು, ಪೊಲೀಸ್ ಇಲಾಖೆಯವರು ನೀಡಿರುವ ನಾಪತ್ತೆ ದೃಢೀಕರಣ ಪತ್ರವನ್ನು ಇನ್ನಿತರೆ ಸೇವಾ ದಾಖಲಾತಿಗಳನ್ನು ಸಲ್ಲಿಸಿರುತ್ತಾರೆ. ಸದರಿ ಕಾಣೆಯಾದ ನಿವೃತ್ತಿ ನೌಕರರ ಪತ್ನಿಯಾದ ಶ್ರೀಮತಿ ದೊಡ್ಡಮ್ಮ ಇವರಿಗೆ ಜೀವನ ನಿರ್ವಹಣೆಗೆ ಕುಟುಂಬ ಪಿಂಚಣಿ ನೀಡಲು ಕೋರಿ ಬಂದಿರುವ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಸರ್ಕಾರದ ಆದೇಶ ಸಂಖ್ಯೆ : ಆರ್ಥಿಕ (ವಿಶೇಷ) 11 ಕುವಿವೇ 1987, ದಿನಾಂಕ 21–3–1988 ರನ್ವಯ ಪಿಂಚಣಿದಾರರ ಕಾಣೆಯಾದ ಪ್ರಸಂಗದಲ್ಲಿ ಕಾಣೆಯಾದ ದಿನಾಂಕದಿಂದ ಬಾಕಿ ಇರುವ ಪೆನ್‌ಷನ್ ಹಾಗೂ ಒಂದು ವರ್ಷ ಪೂರೈಸಿದ ಮರು ದಿನಾಂಕದಿಂದ ನಾಮ ನಿರ್ದೇಶಿತರಾದ ಪತ್ನಿಗೆ ಕುಟುಂಬ ಪಿಂಚಣಿ ಮಂಜೂರು ಮಾಡಲು ಸರ್ಕಾರವು ಸಕ್ಷಮ ಪ್ರಾಧಿಕಾರ ಆಗಿರುವುದರಿಂದ ಶ್ರೀ ಕೆ. ಹೂವಯ್ಯ, ನಿವೃತ್ತ ರೇಷ್ಮೆ ಪ್ರದರ್ಶಕರು ಇವರ ಪತ್ನಿಗೆ ಕುಟುಂಬ ಪಿಂಚಣಿ ಮಂಜೂರು ಮಾಡುವ ಕುರಿತು ಆದೇಶ ಹೊರಡಿಸುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಅಧಿಕೃತ ಜ್ಞಾಪನದ ಕಂಡಿಕೆ 5 ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ ಶ್ರೀಮತಿ ದೊಡ್ಡಮ್ಮರವರಿಗೆ ಕುಟುಂಬ ಪಿಂಚಣಿಯನ್ನು ಮಂಜೂರು ಮಾಡುವ ಬಗ್ಗೆ ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 152 ರೇಇವಿ 2011, ಬೆಂಗಳೂರು, ದಿನಾಂಕ 24ನೇ ಸೆಪ್ಟೆಂಬರ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ನೇಮಕಾತಿ ಪ್ರಾಧಿಕಾರವು ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಆರ್ಥಿಕ (ವಿಶೇಷ) 11 ಕುವಿವೇ 1987, ದಿನಾಂಕ 21–3–1988ರ ಕಂಡಿಕೆ–5 ರಲ್ಲಿನ ಈ ಕೆಳಕಂಡ ಷರತ್ತುಗಳನ್ನು ಪೂರೈಸುವ ಹಾಗೂ ಇದರಲ್ಲಿ ವಿಧಿಸಿರುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಿರುವುದನ್ನು ಖಚಿತಪಡಿಸಿಕೊಂಡು ಶ್ರೀ ಕೆ. ಹೂವಯ್ಯ, ನಿವೃತ್ತ ರೇಷ್ಮೆ ಪ್ರದರ್ಶಕರು ಇವರ ಪತ್ನಿಯಾದ ಶ್ರೀಮತಿ ದೊಡ್ಡಮ್ಮರವರಿಗೆ ನಿಯಮಗಳನ್ವಯ ನೀಡಬಹುದಾದ ಕುಟುಂಬ ಪಿಂಚಣಿಯನ್ನು ಮಂಜೂರು ಮಾಡುವ ಬಗ್ಗೆ ಕ್ರಮ ಕೈಗೊಳ್ಳಲು ಆದೇಶಿಸಿದೆ.

1. ಕುಟುಂಬವು ಸಂಬಂಧಿಸಿದ ಆರಕ್ಷಕ ಠಾಣೆಯಲ್ಲಿ ದೂರನ್ನು ನೋಂದಾಯಿಸಿರಬೇಕು ಮತ್ತು ಸರ್ಕಾರಿ ನೌಕರನ(ಳ)ನ್ನು/ಪೆನ್‌ಷನ್‌ದಾರನ(ಳ)ನ್ನು ಹುಡುಕಲು ಪೋಲೀಸರು ಮಾಡಿದ ಎಲ್ಲಾ ಪ್ರಯತ್ನಗಳೂ ನಿಷ್ಫಲವಾಯಿತೆಂಬ ವರದಿಯನ್ನು ಪಡೆದಿರಬೇಕು.
2. ಒಂದು ವೇಳೆ ಕಾಣೆಯಾದ ಸರ್ಕಾರಿ ನೌಕರನ(ಳು)/ಪೆನ್‌ಷನ್‌ದಾರನು(ಳು) ಹಿಂದಿರುಗಿ ಬಂದು ತನಗೆ ಸಲ್ಲಬೇಕಾದ ಸೌಲಭ್ಯಗಳನ್ನು ನೀಡಬೇಕೆಂದು ಸರ್ಕಾರಕ್ಕೆ ಕ್ಲೈಮು ಸಲ್ಲಿಸಿದ ಸಂದರ್ಭದಲ್ಲಿ, ಕುಟುಂಬ/ನಾಮ ನಿರ್ದೇಶಿತನು(ಳು) ಈ ಆದೇಶದನ್ವಯ ಪಾವತಿ ಮಾಡಲಾದ ಮೊಬಲಗನ್ನು ಮರು ಸಂದಾಯ ಮಾಡುವಂತೆ ಮತ್ತು ಸರ್ಕಾರಕ್ಕೆ ಉಂಟಾದ ನಷ್ಟವನ್ನು ಭರ್ತಿ ಮಾಡಿಕೊಡುವಂತೆ, ಮಂಜೂರಾತಿಯನ್ನು ಮಾಡುವ ಸಕ್ಷಮ ಅಧಿಕಾರಿಗೆ ತೃಪ್ತಿಕರವಾಗುವಂತಹ ಈರ್ವರು ಜಾಮೀನುದಾರರೊಂದಿಗೆ ನಷ್ಟಬಂಧಿ ಪತ್ರವನ್ನು ಈ ಆದೇಶಕ್ಕೆ ಅನುಬಂಧವಾಗಿ ಲಗತ್ತಿಸಿದ ನಮೂನೆಯಲ್ಲಿ ಅನ್ವಯಿಸತಕ್ಕ ಮೌಲ್ಯದ ಮುದ್ರಾಂಕದ ಕಾಗದದ ಮೇಲೆ ಕುಟುಂಬ ನಾಮ ನಿರ್ದೇಶಿತ ವ್ಯಕ್ತಿಯಿಂದ ಪಡೆಯಬೇಕು.
3. ಒಂದು ವೇಳೆ ಕಣ್ಮರೆಯಾದ ಸರ್ಕಾರಿ ನೌಕರನು(ಳು)/ಪೆನ್‌ಷನ್‌ದಾರನು(ಳು) ಹಿಂದಿರುಗಿ ಬಂದು ಸರ್ಕಾರಕ್ಕೆ ಕ್ಲೈಮ್ ಸಲ್ಲಿಸಿದ ಸಂದರ್ಭಗಳಲ್ಲಿ, ಕುಟುಂಬಕ್ಕೆ ಅಥವಾ ನಾಮ ನಿರ್ದೇಶಿತನಿ(ಳಿ)ಗೆ ಪಾವತಿ ಮಾಡಿದ ಮೊಬಲಗನ್ನು ಸರ್ಕಾರಿ ನೌಕರನಿ(ಳಿ)ಗೆ/ಪೆನ್‌ಷನ್‌ದಾರನಿ(ಳಿ)ಗೆ ಪಾವತಿ ಮಾಡಬೇಕಾಗುವ ಮೊಬಲಗಿಗೆ ಹೊಂದಾಣಿಕೆ ಮಾಡಿಕೊಳ್ಳಲು ಕುಟುಂಬ ನಾಮ ನಿರ್ದೇಶಿತನಿಂದ ವಚನ ಪತ್ರವನ್ನು ಪಡೆಯಬೇಕು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಚಂದ್ರಶೇಖರ್,**

ಪೀಠಾಧಿಕಾರಿ,

ತೋಟಗಾರಿಕೆ ಇಲಾಖೆ (ರೇಷ್ಮೆ).

ಪಿ.ಆರ್.ನಂ. 2431

## HORTICULTURE SECRETARIAT

**Sub :** Release of State share for National Horticulture Mission (NHM) programme during 2011-12-reg.

**Read :**
1) Government of India letter No. 18-89/2009-NHM, dated 23-06-2011
2) Letter of Director of Horticulture No. ಮಿನಿ/ಕರಾತೋಮಿಎ/ಎನಿ–1/48/2011–12, dated 20-07-2011.
3) Government Order No. HCD 30 HPP 2011, dated 23-08-2011
4) Corrigendum No. HCD 30 HPP 2011, dated 27-08-2011

**Preamble:**

1. Government of India has conveyed the sanction to the payment of the first installment of Central share of Rs. 5312.50 lakhs under National Horticulture Mission (NHM) during 2011-12 vide Government of India letter read at (1) above.
2. The Director of Horticulture has requested the Government vide his letter read at (2) above to release matching State share.
3. An amount of Rs. 2500.00 lakhs has been earmarked in the budget during 2011-12 under the State sector scheme namely "State share for National Horticulture Mission". Head of account 2401-00-800-2-30 (plan) towards the State share required for the National Horticulture Mission programme.
4. Accordingly, Rs. 796.875 lakhs has been released to the Director of Horticulture towards the matching State share vide Government Order read at (3) above.
5. A corrigendum was issued by reallocating releases among the object codes in the same Head of account vide corrigendum read at (4) above.
6. The Director of Horticulture has also requested to release balance of State share of the last year that was due to the extent of Rs. 79.58 lakhs.
7. The proposal of the Director of Horticulture has been examined and hence this Order

**Government Order No. HCD30 HPP 2011, Bangalore, dated 29-09-2011**

Government is pleased to release to the Director of Horticulture an amount of Rs. 79.58 lakhs (Rupees Seventy Nine Lakhs and Fifty Eight Thousand only) under the Head of account 2401-00-800-2-30 towards the matching State share of National Horticulture Mission programme as detailed below;

(Rs. In lakhs)

| Object Code | Amount Released |
|---|---|
| 059-Other Expenses | 25.465 |
| 133-Special Development Plan | 6.367 |
| 422-Special Component Plan | 31.832 |
| 423-Tribal Sub Plan | 15.916 |
| Total | 79.580 |

2. The expenditure should be incurred only on approved items as per the guidelines.
3. This Order is issued with the concurrence of Finance Department No. FD 322 Exp-4/2010, dated 16-09-2011.

By Order and in the name of the Governor of Karnataka
**B. C. Prakash**
Under Secretary to Government
Horticulture Department

P.R. 2432

## ಯುವಜನ ಸೇವಾ ಸಚಿವಾಲಯ

**ವಿಷಯ :** 12ನೇ ಹಣಕಾಸು ಆಯೋಗದ ಅನುದಾನದಲ್ಲಿ ಸೆಂಟರ್ ಫಾರ್ ಪಾಪ್ಯುಲೇಷನ್ ಡೈನಾಮಿಕ್ಸ್ ಸಂಸ್ಥೆ ರವರಿಂದ ಕೈಗೊಳ್ಳಲಾದ ಈಜುಕೊಳ ಮತ್ತು ಒಳಾಂಗಣ ಕ್ರೀಡಾಂಗಣಗಳ ನಿರ್ಮಾಣ ಯೋಜನೆಯ 2010–11ನೇ ಸಾಲಿನ ಮೌಲ್ಯಮಾಪನ ಕಾರ್ಯಕ್ಕೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ 20–12–2010ರ ಯುಸೇಇ 65 ಸಮನ 2010ನೇ ಸಂಖ್ಯೆಯ ಸರ್ಕಾರದ ಆದೇಶ.
2. ದಿನಾಂಕ 09–02–2011ರ ಯುಸೇಇ 65 ಸಮನ 2010ನೇ ಸಂಖ್ಯೆಯ ಸರ್ಕಾರದ ಆದೇಶ.
3. ದಿನಾಂಕ 17–02–2011ರ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ನಿರ್ದೇಶಕರ ಡಿವೈಎಸ್ಎಸ್/ಟಿಎಫ್‌ಸಿ–2/2010–11ನೇ ಸಂಖ್ಯೆಯ ಪತ್ರ.
4. ದಿನಾಂಕ 31–03–2011ರ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ನಿರ್ದೇಶಕರ ಡಿವೈಎಸ್ಎಸ್/ಟಿಎಫ್‌ಸಿ–2/2010–11ನೇ ಸಂಖ್ಯೆಯ ಪತ್ರ.
5. ದಿನಾಂಕ 23–08–2011ರ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ನಿರ್ದೇಶಕರ ಡಿವೈಎಸ್ಎಸ್/ಟಿಎಫ್‌ಸಿ–2/2010–11ನೇ ಸಂಖ್ಯೆಯ ಪತ್ರ.

**ಪ್ರಸ್ತಾವನೆ :**

12ನೇ ಹಣಕಾಸು ಆಯೋಗದ ಅನುದಾನದಲ್ಲಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯಿಂದ ಈಜುಕೊಳ ಮತ್ತು ಒಳಾಂಗಣ ಕ್ರೀಡಾಂಗಣ ನಿರ್ಮಾಣಗಳ 2010–11ನೇ ಸಾಲಿನ ಮೌಲ್ಯಮಾಪನ ಕಾರ್ಯವನ್ನು ₹ 4,40,000/- ಗಳ ವೆಚ್ಚದಲ್ಲಿ ಕೈಗೊಳ್ಳಲು ಸೆಂಟರ್ ಫಾರ್

ಪಾಪ್ಯುಲೇಷನ್ ಡೈನಾಮಿಕ್ಸ್, ಕೋರಮಂಗಲ, ಬೆಂಗಳೂರು ಇವರಿಗೆ ವಹಿಸಿ ಮೇಲೆ ಓದಲಾದ (1) ಮತ್ತು (2)ರ ಆದೇಶಗಳನ್ನು ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ ಉಲ್ಲೇಖ (3)ರ ಪತ್ರದಲ್ಲಿ, ಈ ಮೌಲ್ಯಮಾಪನ ಕಾರ್ಯಕ್ಕೆ ಬೇಕಾಗುವ ₹ 4,40,000/- ಗಳನ್ನು ಲೆಕ್ಕಶೀರ್ಷಿಕೆ 4202–03–102–0–03–386 ಬಂಡವಾಳ ವೆಚ್ಚ ಒಳಾಂಗಣ ಕ್ರೀಡಾಂಗಣಗಳ ನಿರ್ಮಾಣಗಳ ಅಡಿಯಲ್ಲಿ ಹೆಚ್ಚುವರಿ ಅನುದಾನವಾಗಿ ಬಿಡುಗಡೆ ಮಾಡಲು ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ. ಮೇಲೆ ಓದಲಾದ ಉಲ್ಲೇಖ (4)ರ ಪತ್ರದಲ್ಲಿ ಸದರಿ ಸಂಸ್ಥೆಗೆ ಮೌಲ್ಯಮಾಪನ ಮೊತ್ತದ ಮೊದಲನೇ ಕಂತಾಗಿ ರೂ. 1,32,000/–ಗಳನ್ನು ಪಾವತಿಸಬೇಕಾಗುತ್ತದೆಂದು ತಿಳಿಸಿರುತ್ತಾರೆ. ಮೇಲೆ ಓದಲಾದ ಉಲ್ಲೇಖ (5)ರ ಪತ್ರದಲ್ಲಿ ಸದರಿ ಸಂಸ್ಥೆಯು ಮೌಲ್ಯಮಾಪನದ ಮಧ್ಯಂತರ ವರದಿಯನ್ನು ಮತ್ತು ಮೌಲ್ಯಮಾಪನ ಪ್ರಕ್ರಿಯೆಯನ್ನು ಪೂರ್ಣಗೊಳಿಸಿ ಕರಡು ವರದಿಯನ್ನು ಈಗಾಗಲೇ ಸಲ್ಲಿಸಿದೆ ಎಂದು ತಿಳಿಸುತ್ತಾ, ಈ ಸಂಸ್ಥೆಗೆ ಒಟ್ಟು ಮೌಲ್ಯಮಾಪನ ಮೊತ್ತದ 3 ಕಂತುಗಳ ಬಾಬ್ತು ₹ 3,52,000/- ಗಳನ್ನು ಪಾವತಿಸಲು ಮತ್ತು ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 4202–03–102–0–03–386 ಬಂಡವಾಳ ವೆಚ್ಚ ಒಳಾಂಗಣ ಕ್ರೀಡಾಂಗಣಗಳ ನಿರ್ಮಾಣಗಳ ಅಡಿಯಲ್ಲಿ ಭರಿಸಿ ಆದೇಶ ಹೊರಡಿಸುವಂತೆ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ನಿರ್ದೇಶಕರ ಪ್ರಸ್ತಾವನೆಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯುಸೇಇ 65 ಸಮನ 2010, ಬೆಂಗಳೂರು, ದಿನಾಂಕ : 26–09–2011.**

12ನೇ ಹಣಕಾಸಿನ ಆಯೋಗದ ಅನುದಾನದಲ್ಲಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ವತಿಯಿಂದ ಕೈಗೊಳ್ಳಲಾದ ಈಜುಕೊಳ ಮತ್ತು ಒಳಾಂಗಣ ಕ್ರೀಡಾಂಗಣ ನಿರ್ಮಾಣಗಳ ಕಾರ್ಯದ 2010–11ನೇ ಸಾಲಿನ ಮೌಲ್ಯಮಾಪನ ಕಾರ್ಯವನ್ನು ₹ 4,40,000/- ಗಳ ವೆಚ್ಚದಲ್ಲಿ ಕೈಗೊಳ್ಳಲು ಸೆಂಟರ್ ಫಾರ್ ಪಾಪ್ಯುಲೇಷನ್ ಡೈನಾಮಿಕ್ಸ್, ಕೋರಮಂಗಲ, ಬೆಂಗಳೂರು, ಈ ಸಂಸ್ಥೆಗೆ ವಹಿಸಲಾಗಿದ್ದು, ಈ ಒಟ್ಟು ಮೊತ್ತದ ಮೊದಲನೇ ಕಂತಾಗಿ ಶೇಕಡ 30ರಷ್ಟು ಅಂದರೆ ₹ 1,32,000/- ಗಳನ್ನು ಬಿಡುಗಡೆ ಮಾಡಲು ಈ ಮೂಲಕ ಆದೇಶಿಸಲಾಗಿದೆ.

ಈ ಸಂಬಂಧ ಮೇಲ್ಕಂಡ ವೆಚ್ಚವನ್ನು 2011–12ನೇ ಸಾಲಿನ ಲೆಕ್ಕಶೀರ್ಷಿಕೆ "4202–03–102–0–03–386 ಬಂಡವಾಳ ವೆಚ್ಚ ಒಳಾಂಗಣ ಕ್ರೀಡಾಂಗಣಗಳ ನಿರ್ಮಾಣಗಳ" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 19–05–2011ರ ಯುಸೇಇ 1568 ಐಎಫ್ಎ 2011ನೇ ಸಂಖ್ಯೆಯ ಮತ್ತು ದಿನಾಂಕ 23–09–2011ರ ಯುಸೇಇ 2918 ಐಎಫ್ಎ 11ನೇ ಸಂಖ್ಯೆಯ ಟಿಪ್ಪಣಿಗಳ ಮೂಲಕ ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ. ಶ್ರೀನಿವಾಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಯುವಜನ ಸೇವಾ ಇಲಾಖೆ

ಪಿ.ಆರ್. 2433

## HEALTH AND FAMILY WELFARE SECRETARIAT

**Sub :** Deputation of Doctors to One Year Diploma course in Public Health

**Read :** 1. Letter No. JRO(M)33/2011-12, dated 01/08/2011 and 17/08/2011 of Commissioner for Health and Family Welfare Services.

2) Government Order No. HFW 288 HSH 2011, dated 09/08/2011

**Preamble:**

The Commissioner, Health and Family Welfare Services in his letter dated 01/08/2011 read above had requested to accord approval for deputing seven Medical Officers working in Health and Family Department who had been selected for one year Post Graduate Diploma in Public Health management (PGDPHM) in the year 2011-12 at Indian Institute of Public Health, Hyderabad, accordingly two doctors who were eligible for deputation as per rules were deputed to the said course vide Government Order read at (2) above.

The Commissioner for Health and Family Welfare Services in his letter dated 17/08/2011 read at (1) above has requested to accord approval for deputing to the said course as a special case the two doctors who are otherwise ineligible as per rules for such deputation and who had not been considered in the G.O. read at (2) above. The Government has examined both the proposals and decided to depute the following three doctors as a special case after relaxing the provision in Appendix II-A of the Karnataka Civil Services Rules which stipulates that a Government servant must have rendered not less than five years as regular service before he can be deputed for higher studies/specialized training.

1. Dr. Tulsi Ranganatha, Medical Officer, Primary Health Centre, Bidare, Gubbi Tq. Tumkur Dist.
2. Dr. H. S. Parameshwara, District Programme Maintenance Officer, Gulbarga
3. Dr. Naveen S. B., Medical Officer, Primary Health Centre, Nagenahalli, Beluru Tq. Hassan Dist.

Hence the following Order

**Government Order No. HFW 288 HSH 2011, Bangalore, dated 14-09-2011**

Sanction of Government is accorded for deputation of the following three doctors for undergoing one year Post Graduate Diploma in Public Health Management (PGDPHM) studies in the year 2011-12 at Indian Institute of Public Health, Hyderabad.

1. Dr. Tulsi Ranganatha, Medical Officer, Primary Health Centre, Bidare, Gubbi Tq. Tumkur Dist.
2. Dr. H. S. Parameshwara, District Programme Maintenance Officer, Gulbarga
3. Dr. Naveen S. B., Medical Officer, Primary Health Centre, Nagenahalli, Beluru Tq. Hassan Dist.

This deputation of these officials is subject to following conditions:

a) The fees for this course shall be paid pending approval of Central Government to the PIP under NRHM.

b) The deputed officials shall submit an undertaking to serve in the Health and Family Welfare Department, Government of Karnataka for a period of minimum 10 years and not to apply for voluntary retirement after the completion of the Diploma on a signed bond.

c) These doctors will not be deputed to work in other department/board/corporation/autonomous institute (including Medical Education Department) after the completion of Diploma.

d) The deputed officials shall serve only in the designations/posts available in the Health and Family Welfare Department hospitals and shall not claim new post or designation commensurate with their acquiring PG Diploma.

e) The deputed officials shall execute a bond in Form 19 appended to the Karnataka Civil Serivce Rules before they are relieved of their duties to pursue the Diploma.

The Director, Health and Family Welfare Services shall relieve the officials selected for deputation from their duties only after obtaining an affidavit and penalty bond in Form 19 as provided in the Karnataka Civil Service Rules incorporating the conditions enumerated above.

This order is issued as per the concurrence given by Finance Department vide note No. FD 1120 Exp.-5/2011, dated 14/09/2011.

By Order and in the name of the Governor of Karnataka

**Chikkegowda**

Under Secretary to Government

Health & Family Welfare Department

P.R. 2434 (Services)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಮಾಲೂರು ಕಂದಾಯ ತಾಲ್ಲೂಕಿನಲ್ಲಿ ಖಾಲಿ ಇರುವ 3 ನೋಟರಿ ಹುದ್ದೆಗಳನ್ನು ಭರ್ತಿ ಮಾಡುವ ಬಗ್ಗೆ (ಶ್ರೀ ಕೆ. ರಾಮಯ್ಯ, ನೋಟರಿ, ಮಾಲೂರು ಇವರ ನಿಧನದಿಂದ ತೆರವು ಹಾಗೂ ಹೆಚ್ಚುವರಿಯಾಗಿ ಸೃಜಿಸಲಾಗಿರುವ 2 ಹುದ್ದೆಗಳು)

**ಓದಲಾಗಿದೆ :**

1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರ ಪತ್ರ ಸಂಖ್ಯೆ: ಎಬಿಎಂಟಿ ನಂ. 1488/2009, ದಿನಾಂಕ 31–03–2009.
2. ಸರ್ಕಾರದ ಪತ್ರ ಸಂಖ್ಯೆ: ಲಾ 73 ಎಲ್ ಸಿ ಎಲ್ 2009, ದಿನಾಂಕ 17–09–2009 ಮತ್ತು ದಿನಾಂಕ 18–03–2010.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರ ಪತ್ರ ಸಂಖ್ಯೆ: ಎಬಿಎಂಟಿ ನಂ. 365/2009, ದಿನಾಂಕ 23–01–2010.
4. ಸರ್ಕಾರದ ಆದೇಶ ಸಂಖ್ಯೆ: ಲಾ 73 ಎಲ್‌ಸಿಎಲ್ 2009, ದಿನಾಂಕ 10–03–2010.
5. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರ ಪತ್ರ ಸಂಖ್ಯೆ: ಎಬಿಎಂಟಿ ನಂ. 1495/2010, ದಿನಾಂಕ 31–05–2010.
6. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: GSR 114/E , ದಿನಾಂಕ 24–02–2009.
7. ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009, ದಿನಾಂಕ 18–07–2009
8. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 73 ಎಲ್‌ಸಿಎಲ್ 2009, ದಿನಾಂಕ 09–07–2010.

**ಪ್ರಸ್ತಾವನೆ :**

ಮಾಲೂರು ಕಂದಾಯ ತಾಲ್ಲೂಕಿನಲ್ಲಿ ನೋಟರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಕೆ. ರಾಮಯ್ಯ, ನೋಟರಿ, ಮಾಲೂರು ಇವರು ದಿನಾಂಕ 09–02–2009 ರಂದು ನಿಧನ ಹೊಂದಿರುತ್ತಾರೆ ಎಂದು ಮೇಲೆ (1)ರಲ್ಲಿ ಓದಲಾದ ದಿನಾಂಕ 31–03–2009ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಕೋಲಾರ ಇವರು ವರದಿ ನೀಡಿದ್ದರ ಮೇರೆಗೆ ಸದರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳಡಿಯಲ್ಲಿ ಪರಿಶೀಲಿಸಿ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ 17–09–2009ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ 23–01–2010ರ ಪತ್ರದಲ್ಲಿ 18 ಜನರ ಮೆಮೋರಿಯಲ್‌ಗಳನ್ನೊಳಗೊಂಡ ಪ್ರಸ್ತಾವನೆ ಸಲ್ಲಿಸಿದ್ದರು. ಈ ಮದ್ಯೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಶ್ರೀ ರಾಮಯ್ಯ, ನೋಟರಿ, ಮಾಲೂರು ಕೋಲಾರ ಜಿಲ್ಲೆ ಇವರ ನಿಧನದಿಂದ ತೆರವಾದ ಜಾಗ ಸೇರಿದಂತೆ ಇನ್ನೂ 2 ಹೆಚ್ಚುವರಿ ನೋಟರಿಗಳ ಅವಶ್ಯಕತೆ ಇದೆ ಎಂದು ದಿನಾಂಕ 18–07–2009, 21–12–2009 ಮತ್ತು 23–01–2010ರ ಪತ್ರಗಳಲ್ಲಿನ ವರದಿಗಳನ್ನು ಪರಿಗಣಿಸಿ ಮೇಲೆ (4)ರಲ್ಲಿ ಓದಲಾದ ದಿನಾಂಕ 10–03–2010ರ ಆದೇಶದಲ್ಲಿ ಮಾಲೂರು ಕಂದಾಯ ತಾಲ್ಲೂಕಿಗೆ 2 ನೋಟರಿಗಳ ಹುದ್ದೆಗಳನ್ನು ಸೃಜಿಸಲಾಗಿತ್ತು ಮತ್ತು ಈಗಾಗಲೇ ಸಲ್ಲಿಸಿರುವ ಉಲ್ಲೇಖಿತ (3)ರ ಪ್ರಸ್ತಾವನೆ ಮುಂದುವರಿಸಿ, ಪರಿಷ್ಕೃತ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ 18–03–2010ರ ಪತ್ರದಲ್ಲಿ ಕೋರಲಾಗಿತ್ತು.

ಅದರಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾದೀಶರು ಕೋಲಾರ ಇವರು ಮೇಲೆ (5)ರಲ್ಲಿ ಓದಲಾದ ದಿನಾಂಕ 31–05–2010ರ ಪತ್ರದೊಂದಿಗೆ 8 ಜನರ ಮೆಮೋರಿಯಲ್ಸ್‌ಗಳನ್ನು ಕಳುಹಿಸಿ ದಿನಾಂಕ 23–01–2010ರಂದು ಸಲ್ಲಿಸಿರುವ 18 ಮನವಿಗಳು ಸೇರಿದಂತೆ ಒಟ್ಟು 26 ಮನವಿಗಳಲ್ಲಿ 3 ಜನರ ನೇಮಕಾತಿಗಾಗಿ ಕೋರಿದ್ದರು. ಆಪ್ರಸ್ತಾವನೆಯನ್ನು ಮೇಲೆ (6)ರಲ್ಲಿ ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು, 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ (7)ರಲ್ಲಿ ಓದಲಾದ ದಿನಾಂಕ 18–07–2009ರ ಅಧಿಸೂಚನೆಯಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ (8)ರಲ್ಲಿ ಓದಲಾದ ದಿನಾಂಕ 09–07–2010ರ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ದಿನಾಂಕ 19–07–2010 ರಂದು ಆಯ್ಕೆ ಪಟ್ಟಿಯನ್ನು ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿ, ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 73 ಎಲ್‌ಸಿಎಲ್ 2009, ಬೆಂಗಳೂರು, ದಿನಾಂಕ : 26–09–2011.**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು, 1956 ಹಾಗೂ ತಿದ್ದುಪಡಿ ನಿಯಮಗಳು, 2009ರನ್ವಯ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದಂತೆ ಈ ಕೆಳಕಂಡ ಮೂರು ಜನರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಮಾಲೂರು ಕಂದಾಯ ತಾಲ್ಲೂಕಿನ ನೋಟರಿಗಳನ್ನಾಗಿ ನೇಮಿಸಿದೆ.

1) ಶ್ರೀ ಹೆಚ್. ವಿ. ರಮೇಶ್, ವಕೀಲರು, s/o ವೆಂಕಟೇಶಪ್ಪ, ಶ್ರೀಮಾತಾ ನಿಲಯ, ಮಾರುತಿ ಎಕ್ಸ್‌ಟೆನ್ಷನ್, ಮಾಲೂರು, ಕೋಲಾರ ಜಿಲ್ಲೆ.
2) ಶ್ರೀ ಎಂ. ವೆಂಕಟರಾಮಯ್ಯ, ವಕೀಲರು, s/o ಮುನಿಯಪ್ಪ R/A, ಜಗದೇನಹಳ್ಳಿ ವಿಲೇಜ್, ಲಕ್ಕೂರ್ ಅಂಚೆ, ಮತ್ತು ಹೋಬಳಿ, ಮಾಲೂರು, ಕೋಲಾರ ಜಿಲ್ಲೆ.
3) ಶ್ರೀ ವಿಜಯ ಕುಮಾರ್, ವಕೀಲರು, s/o ಶ್ರೀ ಟಿ. ಗೋಪಾಲಯ್ಯ, ನಿಡಘಟ್ಟ ವಿಲೇಜ್, ಸಂತೇನಹಳ್ಳಿ ಅಂಚೆ, ಕಸಬ ಹೋಬಳಿ, ಮಾಲೂರು, ಕೋಲಾರ ಜಿಲ್ಲೆ.

ಸದರಿ ವಕೀಲರುಗಳು ಲೆಕ್ಕ ಶೀರ್ಷಿಕೆ "0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06" ಇತರೆ ಬಾಬ್ತುಗಳಿಗೆ (0070–01–501–0–06) ನಿಗದಿಪಡಿಸಲಾದ ರೂ. 1000.00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರುಗಳನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್. ಆರ್. ಶಕುಂತಲ**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 2435

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಹೊಸ ಮರಳು ನೀತಿಯ ಅನುಷ್ಠಾನದ ಹಿನ್ನೆಲೆಯಲ್ಲಿ ಮರಳು ಗಣಿಗುತ್ತಿಗೆ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಐ 84 ಎಂಎಂಎನ್ 2009 (ಭಾ–4) ದಿ: 03.05.2011.
2. ಲೋಕೋಪಯೋಗಿ ಇಲಾಖೆಯ ಅ.ಸ. ಪತ್ರ ಸಂಖ್ಯೆ: ಲೋಇ/160/ಬಿಎಂಎಸ್/2011 ದಿ: 13.07.2011.
3. ಸರ್ಕಾರದ ಆದೇಶ ಸಂಖ್ಯೆ: ಸಿಐ 84 ಎಂಎಂಎನ್ 2009, (ಭಾ–4) ದಿ: 14–07–2011.
4. ಲೋಕೋಪಯೋಗಿ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಲೋಇ/77/ಬಿಎಂಎಸ್/ 2011 ದಿ: 21.09.2011.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. 1 ರಲ್ಲಿ ಓದಲಾದ ದಿ: 03.05.2011 ರ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿ ಜಾರಿಗೆ ತರಲಾಗಿರುವ ಕರ್ನಾಟಕ ಮರಳು ನೀತಿ 2011 ರನ್ವಯ ಮರಳು ಗಣಿಗಾರಿಕೆಯನ್ನು ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯು ನಿರ್ವಹಿಸಬೇಕಾಗಿದ್ದು, ಆ ಸಂಬಂಧವಾಗಿ ಅಗತ್ಯವಾದ ಟೆಂಡರ್ ಕರೆಯುವ ಪ್ರಕ್ರಿಯೆಗೆ ಕಾಲಾವಕಾಶ ಬೇಕಾಗುತ್ತಿದ್ದು, ಇದರಿಂದಾಗಿ ರಾಜ್ಯದಲ್ಲಿ ಪ್ರಗತಿಯಲ್ಲಿರುವ ಅನೇಕ ಅಭಿವೃದ್ಧಿ ಕಾಮಗಾರಿಗಳಿಗೆ ಹಾಗೂ ಸಾರ್ವಜನಿಕರಿಗೆ ಅವಶ್ಯವಿರುವ ಮರಳಿನ ಲಭ್ಯತೆಯನ್ನು ಸರಾಗಗೊಳಿಸುವ ಹಿನ್ನೆಲೆಯಲ್ಲಿ ದಿ: 31.03.2011 ರ ನಂತರ ಅವಧಿ ಬಾಕಿ ಇರುವ ಮರಳು ಬ್ಲಾಕ್‌ಗಳ ಗಣಿಗುತ್ತಿಗೆ ಅವಧಿಯನ್ನು ವಿಸ್ತರಿಸಲು ಹಾಗೂ ಈಗಾಗಲೇ ಗುತ್ತಿಗೆ ಅವಧಿ ಮುಕ್ತಾಯಗೊಂಡಿರುವ ಮರಳು ಬ್ಲಾಕ್‌ಗಳ ಗುತ್ತಿಗೆ ಅವಧಿಯನ್ನು ಪ್ರಮಾಣಾಧಾರಿತ (proportionate) ಶುಲ್ಕವನ್ನು ಕಟ್ಟಿಸಿಕೊಂಡು ದಿ: 15.06.2011 ರವರೆಗೆ ಮುಂದುವರೆಸಲಾಗಿರುತ್ತದೆ.

ಮುಂದುವರೆದು, ಮರಳು ಗಣಿಗಾರಿಕೆಗೆ ಸಂಬಂಧಿಸಿದಂತೆ ಕಾರ್ಯೋನ್ಮುಖವಾಗುವ ನಿಟ್ಟಿನಲ್ಲಿ ಗುತ್ತಿಗೆದಾರರನ್ನು ಅಂತಿಮಗೊಳಿಸುವ ಹಾಗೂ ಇನ್ನಿತರೆ ಅವಶ್ಯ ಮೂಲಭೂತ ಸೌಲಭ್ಯಗಳನ್ನು ಸಿದ್ಧತೆ ಮಾಡಿಕೊಳ್ಳುವ ಸಲುವಾಗಿ ಕಾಲಾವಕಾಶ ಬೇಕಾಗುತ್ತದೆ ಎಂದು ಮೇಲೆ ಕ್ರ.ಸಂ. 2 ರಲ್ಲಿ ಓದಲಾದ ಸರ್ಕಾರದ ಕಾರ್ಯದರ್ಶಿಗಳು ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಇವರ ಅರೆ ಸರ್ಕಾರಿ ಪತ್ರದ ಕೋರಿಕೆಯನ್ವಯ ದಿ: 15.09.2011 ರವರೆಗೆ ದಿ: 03.05.2011ರ ಆದೇಶದಲ್ಲಿನ ಷರತ್ತುಗಳನ್ನು ಅನುಸರಿಸಿ ಕ್ರ.ಸಂ. 3 ರಲ್ಲಿನ ಸರ್ಕಾರದ ಆದೇಶ ದಿ: 14.07.2011 ರನ್ವಯ ಮುಂದುವರೆಸಲಾಗಿರುತ್ತದೆ.

ಪ್ರಸ್ತುತ ಎಲ್ಲಾ ಜಿಲ್ಲೆಗಳಲ್ಲಿ ಟೆಂಡರ್ ಪ್ರಕ್ರಿಯೆಯು ಅಂತಿಮ ಹಂತದಲ್ಲಿದ್ದು, ಮರಳು ಗಣಿಗಾರಿಕೆಯನ್ನು ಅಂತಿಮಗೊಳಿಸಲು ಅಗತ್ಯವಿರುವ ಚೆಕ್‌ಪೋಸ್ಟ್ ಹಾಗೂ ಸ್ಟಾಕ್ ಯಾರ್ಡ್‌ಗಳನ್ನು ಗುರುತಿಸಲಾಗಿದ್ದು, ಟೆಂಡರ್‌ನ್ನು ಅಂತಿಮಗೊಳಿಸಿ ಗುತ್ತಿಗೆದಾರರನ್ನು ನೇಮಿಸುವ ಪ್ರಕ್ರಿಯೆಯು ಬಾಕಿ ಉಳಿದಿರುವುದರಿಂದ, ದಿ: 15.10.2011 ರಿಂದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯು ಮರಳು ಗಣಿಗಾರಿಕೆಯನ್ನು ಹೊಸ ಮರಳು ನೀತಿಯನ್ವಯ ಅನುಷ್ಠಾನಗೊಳಿಸುವುದಾಗಿ ತಿಳಿಸುತ್ತಾ ಅಲ್ಲಿಯವರೆಗೆ ಸಮಯಾವಕಾಶ ನೀಡುವಂತೆ ಮೇಲೆ ಓದಲಾದ ಕ್ರ.ಸಂ. 4ರಲ್ಲಿನ ಅನಧಿಕೃತ ಟಿಪ್ಪಣಿಯಲ್ಲಿ ಕೋರಲಾಗಿದೆ.

ಈ ಎಲ್ಲಾ ಹಿನ್ನೆಲೆಯಲ್ಲಿ ಕ್ರ.ಸಂ. 4 ರಲ್ಲಿನ ಅನಧಿಕೃತ ಟಿಪ್ಪಣಿಯ ಕೋರಿಕೆಯನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 84 ಎಂಎಂಎನ್ 2009, (ಭಾಗ–3) ಬೆಂಗಳೂರು, ದಿನಾಂಕ : 26–09–2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಹಿಂದಿನ ಸರ್ಕಾರಿ ಆದೇಶ ಸಂಖ್ಯೆ: ಸಿಐ 84 ಎಂಎಂಎನ್ 2009 (ಭಾಗ–4) ದಿ: 14.07.2011 ರಲ್ಲಿ ದಿ: 15.09.2011 ರವರೆಗೆ ವಿಸ್ತರಿಸಲಾಗಿದ್ದ ಅವಧಿಯನ್ನು, ದಿ: 14.10.2011 ರವರೆಗೆ ದಿ: 03.05.2011ರ ಸರ್ಕಾರದ ಆದೇಶದಲ್ಲಿನ ಮಾನದಂಡದ ಆಧಾರದ ಮೇಲೆಯೇ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ನಾಗಭೂಷಣ್**

ಪೀಠಾಧಿಕಾರಿ (ಗಣಿ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 2436

## COMMERCE & INDUSTRIES SECRETARIAT

**Sub :** M/s. Pepsico India Holdings Pvt. Ltd., to expand “Non Alcoholic Beverages, Fruit Juice Based Beverages Packaged Drinking Water” project at 34 K.M Stone, NH-4, Theppada Begur Village, Nelamangala Taluk, Bangalore Rural District-review of the Sy. Nos-reg.

**Read :**
1. Govt. Order No: CI 84 SPI 2011, dated: 26.02.2011.
2. Proceedings of the 25th State High Level Clearance Committee (SHLCC) Meeting held on 14.07.2011.

**Preamble :**

The project proposal of M/s. Pepsico India Holdings Pvt. Ltd., to expand “Non Alcoholic Beverages, Fruit juice based Beverages Packaged Drinking water” project with an investment of 55.00 crores in 43 acres of own land at 34 K.M. Stone, NH-4, Theppada Begur Village, Nelamangala Taluk, Bangalore Rural District, has been approved vide G.O read at (1) above. The Sy.Nos. provided by the company in the project proposal are 87, 89,1,89/2, 89/3, 90, 91/1, 91/2, 93/1, 93/2, 94/2, 95, 96/3, 96/4, 97, 98/2A, 98/2B, 100/1, 100/2, 103/1, 103/2, 104/3, 104/1A, 105/2, 105/3, 107/1, 107/2, 108/1, 108/2, 109 & 110 of Theppada Begur Village, Nelamangala taluk, Bangalore Rural District.

The Member Secretary of Nelamangala Planning Authority in his letter dated 25.01.2011 has informed that Sy. No. 87, 89, 1, 89/2, 89/3 90, 91/1, 91/2, 93/1, 93/2, 94/2, 95, 96/3, 96/4, 97, 98/2A, 98/2B, 100/1, 100/2, 103/1, 103/2, 104/3, 104/1A, 105/2, 105/3 are in Tippagondanahalli Reservoir Zone-1 and 107/1, 107/2, 108/1, 108/2, 109 & 110 are in Tippagondanahalli Reservoir Zone-4. Further he informed that the said lands are in agriculture zone as per approved interim Master Plan and hence establishing of “Non Alcoholic Beverages, Fruit juice Based Beverages Packaged Drinking water” project is not be permitted in the Agriculture Zone as per the Zoning Regulations.

The Chairman, KSPCB, had a personal hearing with the representatives of the Company on 03.05.2011 and appraised the authorities about prohibition of excess withdrawal of ground water in the Tippagondanahalli catchment area as this industry consumes huge quantity of water and suggested the company to obtain water from outside source as the present scenario shows that the water table in the catchment are in getting depleted year by year.

As per the Notification No: FEE 215 ENV 2000 dt: 18.11.2003, the State Govt. has made restrictions in setting up industries in Thippagondanahalli catchment area.

| Zone | Area covered | Nature of restricted/regulated activities |
|---|---|---|
| 1 | EntireTippagondanahalli Reservoir (TGR) catchment area specified in annexure to this Notification | • Regulation and checking of over exploitation of ground water<br>• No fresh leases or license for mining, quarrying & stone crushers shall be granted.<br>• No person shall dispose solid as well as liquid waste in this area without scientific processing.<br>• To ensure adoption of rainwater harvesting systems in all the new and existing buildings, within six months from the date of issue of this order.<br>• To promote organic farming including bio-Fertilizer and bio-Opesticide. |

| | | |
|---|---|---|
| 2 | Area covered within 1 Km to 2 km distance, from the river banks of Arkavathi (only up to Hesarghatta Tank from TGR) and Kumudvathi (Excluding the areas falling within Zone 2) | • Permit only those industrial activities which are listed as Green category, by the Karnataka State Pollution Control Board with mandatory adoption of rainwater harvesting systems & waste water treatment facilitates. The other regulatory/civic agencies to issue permit only after consent for establishment (CFE) is obtained from the KSPCB.<br>• Permit new buildings with only ground and first floor with mandatory adoption of rainwater harvesting systems. |

KSPCB has classified this project as Red category industry. It is felt necessary to inpose a condition on the company that, they shall establish the manufacturing facilities only in lands at Sy.Nos. 87, 89, 1, 89/2, 89/3, 90, 91/1, 91/2, 93/1, 93/2, 94/2, 95, 96/3, 96/4, 97, 98/2A, 98/2B, 100/1, 100/2, 103/1, 103/2, 104/3, 104/1A, 105/2, 105/3 which are in Tippagondanahalli Reservoir Zone-1 and get the building plans endorsed by the KSPCB authorities. The company shall adhere to the restrictions laid in the above Notification.

In the 25th State High Level Clearance Committee (SHLCC) Meeting held on 14.07.2011, the proposal of the Company was discussed and approved.

Government has examined the recommendations made by the State High Level Clearance Committee in the 25th Meeting held on 14.07.2011, in all aspects.

Hence the following order.

**Government Order No: CI 84 SPI 2011, Bangalore Dated: 12.09.2011**

In the circumstances explained in the preamble, Government is pleased to accord approval for the following.

i. The company shall implement the project only in lands at Sy. Nos. 87, 89, 1, 89/2, 89/3, 90, 91/1, 91/2, 93/1, 93/2, 94/2, 95, 96/3, 96/4, 97, 98/2A, 98/2B, 100/1, 100/2, 103/1, 103/2, 104/3, 104/1A, 105/2, 105/3 which falls in Zone-1 of regulated zone of Tippagondanahalli reservoir vide Government notification and Government Order dated respectively 18.11.2003 & 01.01.2004 issued by department of Forest, Ecology and Environment, GOK, No activity should be considered in Sy. Nos. which falls under Zone - 4 of the said Government order and notification. The building plans to be endorsed by KSPCB.

ii. The company shall not exploit the ground water resources and should source water from outside sources.

Other terms and conditions, remain the same as in the G.O. read at (1) above.

By Order and in the name of the Governor of Karnataka

**A.V. Srinivasa Dikshit**

P.R. 2437

Desk Officer (Technical Cell)

Commerce & Industries Department

## COMMERCE & INDUSTRIES SECRETARIAT

**Sub :** Proposal of M/s. Vasuki Power Ltd., to establish “Biomass Based Power Plant” at Chikka Nellur Village, Hosa Neeralagi Post, Shiggaon Taluk, Haveri District - change of location & increase of power generation capacity-reg.

**Read :** 1. Govt. Order No: CI 358 SPI 2010, dated: 15.07.2010.

2. Proceedings of the 25th State High Level Clearance Committee (SHLCC) Meeting held on 14.07.2011.

**Preamble :**

The proposal of M/s. Vasuki Power Limited to establish a 6 MW biomass based power plant with an investment of Rs. 60.6 crores in 10 acres of own land at Chikka Nellur Village, Hosa Neeralagi Post, Shiggaon Taluk, Haveri District, was approved vide G.O read at (1) above. The project proponent informed about the availability of 21.46 lakhs MT of Biomass fuels i.e. agricultural, residues, like Groundnut, Corn, Rice, Husk, Coconut Shells & Fronds, Cotton Stalk, etc., & other Agro Wastes within a radius of about 50 Kms of the project area, whereas company requires 75000 MT per annum for 10 MW. Hence, requested to enhance the plant capacity from 6 MW to 10 MW. Hence, requested to enhance the plant capacity from 6 MW to 10 MW and also change of location.

In the 25th State High Level Clearance Committee (SHLCC) Meeting held on 14.07.2011, the proposal of the Company was discussed and approved.

Government has examined the recommendations made by the State High Level Clearance Committee in the 25th Meeting held on 14.07.2011, in all aspects.

Hence the following order.

**Government Order No. : CI 203 SPI 2011, Bangalore, Dated : 09.09.2011**

In the circumstances explained in the preamble, Government is pleased to accord approval for the following.

i. Enhancement of Biomass Based Power Plant capacity from 6 MW to 10 MW.
ii. Change of location from Chikka Nellur Village, Hosa Neeralagi Post, Shiggaon Taluk, Haveri District to Chillur Village, Savanur Taluk, Haveri District.

Other terms and conditions, remain the same as in the G.O. reat at (1) above.

By Order and in the name of the Governor of Karnataka
**A.V. Srinivasa Dikshit**
Desk Officer (Technical Cell)
Commerce & Industries Department

P.R. 2438

## COMMERCE & INDUSTRIES SECRETARIAT

### CORRIGENDUM

**Sub :** M/s. Arihant Ispat Pvt. Ltd., to establish "Integrated Steel Plant with Captive Power Plant" - Request for correction in the G.O. reg.

**Read :**
1. Govt. Order No: CI 71 SPI 2008, dated: 02.05.2008.
2. Corrigendum No: CI 71 SPI 2008, dated: 11.08.2010.
3. Govt. Order No: CI 71 SPI 2008, dated: 21.07.2010.
4. Proceedings of the 25th State High Level Clearance Committee (SHLCC) Meeting held on 14.07.2011.

In the Corrigendum read at (2) above in the 3rd line **"Bellary District in 100 acres"** shall be read as **"Bellary District in 125 acres"**.

Other terms and conditions, remain the same as in the G.O. read at (1) above.

By Order and in the name of the Governor of Karnataka
**A.V. Srinivasa Dikshit**
Desk Officer (Technical Cell)
Commerce & Industries Department

P.R. 2439

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

ವಿಷಯ : ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರಗಳನ್ನು (ಡಿ.ಡಿ.ಆರ್.ಸಿ) ಪುನಶ್ಚೇತನಗೊಳಿಸುವ ಬಗ್ಗೆ.

ಓದಲಾಗಿದೆ:
1) ಸರ್ಕಾರದ ಆದೇಶದ ಸಂಖ್ಯೆ: ಮಮಇ 173 ಪಿಎಚ್‌ಪಿ 2010, ದಿನಾಂಕ: 12–05–2011.
2) ತಿದ್ದುಪಡಿ ಸಂಖ್ಯೆ ಮಮಇ 173 ಪಿಎಚ್‌ಪಿ 2010 ದಿನಾಂಕ: 29–07–2011.
3) ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆ ಇವರ ಪತ್ರ ಸಂಖ್ಯೆ: ನಿಅಕಇ/ ಜಿ.ಅಂ.ಪು.ಕೇಂ/ ಸಿ–9/31/2010–11/2173, ದಿನಾಂಕ: 15–09–2011.

ಪ್ರಸ್ತಾವನೆ:

ಮೇಲೆ ಓದಲಾದ(1)ರಲ್ಲಿ ರಾಜ್ಯದ ಮೈಸೂರು, ಗದಗ ಮತ್ತು ರಾಯಚೂರು ಜಿಲ್ಲೆಗಳ ಜಿಲ್ಲಾ ಅಂಗವಿಕಲರ ಪುರ್ನವಸತಿ ಕೇಂದ್ರಗಳನ್ನು (ಡಿ.ಡಿ.ಆರ್.ಸಿ) 2011–12ನೇ ಸಾಲಿನಿಂದ ರಾಜ್ಯ ಅನುದಾನದಡಿ ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ನಿರ್ವಹಣಾ ಸಮಿತಿಯಲ್ಲಿ ಆಯ್ಕೆಗೊಳ್ಳುವ ಇಂಡಿಯನ್ ರೆಡ್ ಕ್ರಾಸ್ ಸೊಸೈಟಿ ಮುಖಾಂತರ ನಡೆಸಲು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು.

ಮೇಲೆ ಓದಲಾದ (2) ರಲ್ಲಿ ದಿನಾಂಕ: 12–05–2011ರ ಸರ್ಕಾರಿ ಆದೇಶ ಸಂಖ್ಯೆ: ಮಮಇ 173 ಪಿಎಚ್‌ಪಿ 2010ರ ಅನುಬಂಧ–1, 2 ಮತ್ತು 3ರ ಬದಲಿಗೆ ತಿದ್ದುಪಡಿ ಆದೇಶಕ್ಕೆ ಹೊಸದಾಗಿ ಲಗತ್ತಿಸಿರುವ ಅನುಬಂಧ–1, 2 ಮತ್ತು 3ನ್ನು ಸೇರಿಸಿ ತಿದ್ದಿ ಓದಿಕೊಳ್ಳತಕ್ಕದ್ದು ಎಂದು ಆದೇಶಿಸಲಾಗಿತ್ತು.

ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಕಲ್ಯಾಣ ಇಲಾಖೆ ಇವರು ಮೇಲೆ ಓದಲಾದ (3)ರ ಪರಿಷ್ಕೃತ ಪ್ರಸ್ತಾವನೆಯಲ್ಲಿ ಗದಗ, ಮೈಸೂರು ಹಾಗೂ ರಾಯಚೂರು ಜಿಲ್ಲೆಗಳಲ್ಲಿ ಕ್ರಮವಾಗಿ ಸೆಪ್ಟೆಂಬರ್ ಹಾಗೂ ಅಕ್ಟೋಬರ್ 2011ರ ಮಾಹೆಗಳಲ್ಲಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರವನ್ನು ಪ್ರಾರಂಭಿಸಲಾಗುತ್ತಿದ್ದು, ಗದಗ ಜಿಲ್ಲೆಯ ಕೇಂದ್ರದ ಅನುಷ್ಠಾನಕ್ಕೆ ರೂ. 19,25,800/– ಮೈಸೂರು ಜಿಲ್ಲೆಯ ಕೇಂದ್ರದ ಅನುಷ್ಠಾನಕ್ಕೆ ರೂ. 14,36,400/– ಹಾಗೂ ರಾಯಚೂರು ಜಿಲ್ಲೆಯ ಕೇಂದ್ರದ ಅನುಷ್ಠಾನಕ್ಕೆ ರೂ. 17,36,400/– ಒಟ್ಟು ರೂ. 50,98,600/–ಗಳ ಆಯವ್ಯಯ ವೆಚ್ಚವಾಗಲಿದ್ದು, 2011–12ನೇ ಸಾಲಿನಲ್ಲಿ ಯೋಜನೆಯ ಅನುಷ್ಠಾನಕ್ಕೆ ಒದಗಿಸಿರುವ ರೂ.100.00 ಲಕ್ಷಗಳ ಆಯವ್ಯಯದಲ್ಲಿ ರೂ. 49,01,400/– ಗಳು ಉಳಿಕೆಯಾಗುತ್ತದೆ. ಅಲ್ಲದೆ ಹಾವೇರಿ ಜಿಲ್ಲೆಯಲ್ಲಿ ಜಿಲ್ಲಾ ಅಂಗವಿಕಲರ ಪುನರ್ವಸತಿ ಕೇಂದ್ರವನ್ನು ಅಕ್ಟೋಬರ್ 2011ರ ಮಾಹೆಯಿಂದ ಪ್ರಾರಂಭಿಸಲು ಉದ್ದೇಶಿಸಿರುವುದರಿಂದ ಮಾರ್ಚ್ ಅಂತ್ಯದವರೆಗೆ ರೂ. 17,36,400/–ಗಳ ಆಯವ್ಯಯದ ಅವಶ್ಯಕತೆ ಇರುತ್ತದೆ. ಅದರಂತೆ ಗದಗ, ಮೈಸೂರು, ರಾಯಚೂರು ಮತ್ತು ಹಾವೇರಿ ಜಿಲ್ಲೆಗಳಲ್ಲಿ ಯೋಜನೆಯ ಅನುಷ್ಠಾನಕ್ಕೆ 2011–12ನೇ ಸಾಲಿನ ಮಾರ್ಚ್ ಅಂತ್ಯದವರೆಗೆ ರೂ. 68,35,000/–ಗಳು ಮಾತ್ರ ವೆಚ್ಚವಾಗಲಿದ್ದು, ಈ ಯೋಜನೆಗೆ ಒದಗಿಸಿರುವ ರೂ. 100.00 ಲಕ್ಷಗಳ ಆಯವ್ಯಯದಲ್ಲಿ ಇನ್ನೂ ರೂ. 31,65,000/–ಗಳು ಉಳಿತಾಯವಾಗುತ್ತದೆ. ಆದ್ದರಿಂದ ಇದಕ್ಕಾಗಿ ಹೆಚ್ಚುವರಿ ಆಯವ್ಯಯದ ಅವಶ್ಯಕತೆ ಇರುವುದಿಲ್ಲ ಹಾಗೂ ಒದಗಿಸಲಾಗಿರುವ

